ಲಿಖಿತ ಮೂಲಕ ಉತ್ತರಿಸುವ ಪ್ರಶ್ನೆ



**ಕರ್ನಾಟಕ ವಿಧಾನ ಪರಿಷತ್ತು**

ನೂರ ನಲವತ್ತೆರಡನೆಯ ಅಧಿವೇಶನ

ಶುಕ್ರವಾರ, ದಿನಾಂಕ: 11ನೇ ಡಿಸೆಂಬರ್, 2020

ಕೊರೋನಾ ವಾರಿಯರ್ಸ್‌ಗಳಿಗೆ ನೀಡಲಾದ ಸೀರೆ ಖರೀದಿಯ ಬಗ್ಗೆ

ಶ್ರೀ ಎಂ.ನಾರಾಯಣಸ್ವಾಮಿ (ಸ್ಥಳೀಯ ಸಂಸ್ಥೆಗಳ ಕ್ಷೇತ್ರ):-

450(520) ಮಾನ್ಯ ಕೈಮಗ್ಗ ಮತ್ತು ಜವಳಿ ಹಾಗೂ ಅಲ್ಪ ಸಂಖ್ಯಾತರ ಕಲ್ಯಾಣ ಸಚಿವರು ಈ ವಿಷಯಗಳನ್ನು ದಯವಿಟ್ಟು ತಿಳಿಸುವರೆ:-

(ಅ) ರಾಜ್ಯ ಸರ್ಕಾರವು ಆರ್ಥಿಕ ಸಂಕಷ್ಟಕ್ಕೆ ಒಳಗಾಗಿದ್ದ ನೇಕಾರರಿಂದ ಪರಿಹಾರೋಪಾಯವಾಗಿ ಕೊರೋನಾ ವಾರಿಯರ್ಸ್‌ಗಳಿಗೆ ನೀಡಲು ರಾಜ್ಯದ ಸೀರೆ ಖರೀದಿಸುವುದಾಗಿ ಭರವಸೆ ನೀಡಲಾಗಿದೆಯೇ;

(ಆ) ಈ ರೀತಿಯ ಸೀರೆ ಖರೀದಿಯನ್ನು ಯಾವ ಯಾವ ಜಿಲ್ಲೆಗಳಿಂದ ಮಾಡಲಾಗಿದೆ; (ವಿವರ ಒದಗಿಸುವುದು)

(ಇ) ಖರೀದಿಸಲಾದ ಸೀರೆಗಳಿಗೆ ನೇಕಾರರಿಗೆ ಹಣ ಪಾವತಿಸಲಾಗಿದೆಯೇ;

(ಈ) ಕೊರೋನಾ ಸಮಯದಲ್ಲಿ ಆರ್ಥಿಕ ಸಂಕಷ್ಟಕ್ಕೆ ಒಳಗಾಗಿದ್ದ ನೇಕಾರರಿಗೆ ಯಾವ ರೀತಿ ಪರಿಹಾರ ಒದಗಿಸಲಾಗಿದೆ? (ವಿವರ ಒದಗಿಸುವುದು)